# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ
(ಮೊದಲನೇ ಅಧಿವೇಶನ)

## ಕಾರ್ಯಕಲಾಪಗಳ ಪಟ್ಟಿ

ಗುರುವಾರ, ದಿನಾಂಕ 6ನೇ ಜೂನ್, 2013
(ಸಮಯ: ಬೆಳಗ್ಗೆ 11.00 ಗಂಟೆಗೆ)

-----

### 1. ಸಭೆಯ ಮುಂದಿಡಲಾಗುವ ಕಾಗದ ಪತ್ರಗಳು

ಶ್ರೀ ಸಿದ್ದರಾಮಯ್ಯ (ಮುಖ್ಯಮಂತ್ರಿಗಳು) ಅವರು ಭಾರತ ಸಂವಿಧಾನದ 151(2)ನೇ ಅನುಚ್ಛೇದದ ಮೇರೆಗೆ 31ನೇ ಮಾರ್ಚ್, 2012ನೇ ವರ್ಷಕ್ಕೆ ಕೊನೆಗೊಂಡಂತೆ ಭಾರತದ ನಿಯಂತ್ರಕರು ಮತ್ತು ಮಹಾಲೇಖಪರಿಶೋಧಕರು ನೀಡಿರುವ ಸ್ಥಳೀಯ ಸಂಸ್ಥೆಗಳ ವರದಿ (ಸಂಖ್ಯೆ 6) ಯನ್ನು ಸಭೆಯ ಮುಂದಿಡುವುದು.

### 2. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ

ಶ್ರೀಯುತರುಗಳಾದ ಹೆಚ್.ಡಿ. ಕುಮಾರಸ್ವಾಮಿ, ಹೆಚ್.ಡಿ. ರೇವಣ್ಣ, ಕೆ.ಎಂ. ಶಿವಲಿಂಗೇಗೌಡ, ಎ.ಬಿ. ರಮೇಶ್ ಬಂಡಿಸಿದ್ದೇಗೌಡ, ವೈ.ಎಸ್.ವಿ. ದತ್ತ, ಸಿ.ಎನ್ ಬಾಲಕೃಷ್ಣ ಅವರುಗಳು ರಾಜ್ಯದಲ್ಲಿ ತೀವ್ರತರವಾದ ಬರಗಾಲದಿಂದಾಗಿ ತೆಂಗು ಬೆಳೆ ಸಂಪೂರ್ಣ ನಾಶವಾಗಿರುವುದರಿಂದ ಹಾಗೂ ತೆಂಗು ಉತ್ಪನ್ನಗಳ ಬೆಲೆಗಳು ಕುಸಿದಿರುವುದರಿಂದ ರೈತರಿಗೆ ಉಂಟಾಗಿರುವ ತೊಂದರೆಯ ಕುರಿತು ನೀಡಿರುವ ಸೂಚನೆಯ ಬಗ್ಗೆ ಚರ್ಚೆ.

### 3. ಘನತೆವೆತ್ತ ರಾಜ್ಯಪಾಲರ ಭಾಷಣಕ್ಕೆ ಸಂಬಂಧಿಸಿದ ವಂದನಾರ್ಪಣಾ ಪ್ರಸ್ತಾವ

ಶ್ರೀ ಬಸವರಾಜ ರಾಯರೆಡ್ಡಿ, ಅವರು ದಿನಾಂಕ: 04ನೇ ಜೂನ್, 2013ರಂದು ಸೂಚಿಸಿದ ಕೆಳಕಂಡ ಪ್ರಸ್ತಾವದ ಮೇಲೆ ಮುಂದುವರೆದ ಚರ್ಚೆ;

"2013ರ ಜೂನ್, 3ರಂದು ವಿಧಾನಮಂಡಲದ ಉಭಯ ಸದನಗಳ ಸದಸ್ಯರನ್ನುದ್ದೇಶಿಸಿ ದಯಪಾಲಿಸಿದ ಭಾಷಣಕ್ಕಾಗಿ ಈ ಅಧಿವೇಶನದಲ್ಲಿ ಸೇರಿರುವ ವಿಧಾನಸಭೆಯ ಸದಸ್ಯರಾದ ನಾವು ಘನತೆವೆತ್ತ ರಾಜ್ಯಪಾಲರಿಗೆ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸಲು ಅಪ್ಪಣೆ ಕೋರುತ್ತೇವೆ"

**ಪಿ.ಓಂಪ್ರಕಾಶ**
ಕಾರ್ಯದರ್ಶಿ

Raj N

ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.
(www.kar.nic.in/kla)

# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ
(ಮೊದಲನೇ ಅಧಿವೇಶನ)

**ಪೂರಕ ಕಾರ್ಯಕಲಾಪಗಳ ಪಟ್ಟಿ**

ಗುರುವಾರ, ದಿನಾಂಕ 6ನೇ ಜೂನ್ 2013

(ಸಮಯ: ಬೆಳಿಗ್ಗೆ 11.00 ಗಂಟೆಗೆ)

-----

**(ಐಟಂ 1ರ ನಂತರ ಈ ಕೆಳಕಂಡ ವಿಷಯವನ್ನು ಸೇರಿಸಿಕೊಳ್ಳತಕ್ಕದ್ದು)**

## 1.(ಎ) ಶಾಸನ ರಚನೆ

### 1. ವಿಧೇಯಕವನ್ನು ಮಂಡಿಸುವುದು

1. ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) (ವಿಶೇಷ ಉಪಬಂಧಗಳು) ವಿಧೇಯಕ, 2013

ಶ್ರೀ ಆರ್.ವಿ ದೇಶಪಾಂಡೆ (ಉನ್ನತ ಶಿಕ್ಷಣ ಮತ್ತು ಪ್ರವಾಸೋದ್ಯಮ ಸಚಿವರು) ಅವರು

ಅ) 2013ನೇ ಸಾಲಿನ ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) (ವಿಶೇಷ ಉಪಬಂಧಗಳು) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

### 2. ವಿಧೇಯಕವನ್ನು ಪರ್ಯಾಲೋಚಿಸುವುದು ಹಾಗೂ ಅಂಗೀಕರಿಸುವುದು

1. ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) (ವಿಶೇಷ ಉಪಬಂಧಗಳು) ವಿಧೇಯಕ, 2013

ಶ್ರೀ ಆರ್.ವಿ ದೇಶಪಾಂಡೆ (ಉನ್ನತ ಶಿಕ್ಷಣ ಮತ್ತು ಪ್ರವಾಸೋದ್ಯಮ ಸಚಿವರು) ಅವರು

ಅ) 2013ನೇ ಸಾಲಿನ ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) (ವಿಶೇಷ ಉಪಬಂಧಗಳು) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

ಪಿ. ಓಂಪ್ರಕಾಶ
ಕಾರ್ಯದರ್ಶಿ